# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 132 |
| ಮಾನ್ಯ ಸದಸ್ಯರ ಹೆಸರು | ಡಾ: ತಳವಾರ್ ಸಾಬಣ್ಣ<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ಸಚಿವರು | ಮಾನ್ಯ ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 13.09.2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿರುವ ಅಂಬಿಗರ ಚೌಡಯ್ಯನವರ ಅಧ್ಯಯನ ಪೀಠಕ್ಕೆ ಖಾಯಂ ನಿರ್ದೇಶಕರನ್ನು ನೇಮಿಸಲಾಗಿದೆಯೇ; | ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿರುವ ಅಂಬಿಗರ ಚೌಡಯ್ಯನವರ ಅಧ್ಯಯನ ಪೀಠಕ್ಕೆ ಸರ್ಕಾರದಿಂದ ಯಾವುದೇ ಖಾಯಂ ನಿರ್ದೇಶಕರ ಹುದ್ದೆ ಮಂಜೂರಾಗಿರುವುದಿಲ್ಲ. ಹೀಗಾಗಿ, ತಾತ್ಕಾಲಿಕವಾಗಿ ಒಬ್ಬ ಪ್ರಾಧ್ಯಾಪಕರನ್ನು ಸದರಿ ಪೀಠದ ಅಡಿಯಲ್ಲಿ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳಲು ನೇಮಿಸಲಾಗಿದೆ. |
| (ಆ) | ಸದರಿ ಪೀಠದಡಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಕೈಗೊಂಡ ಚಟುವಟಿಕೆಗಳು ಯಾವುವು; | ಸದರಿ ಪೀಠದಡಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಈ ಕೆಳಕಂಡ ಚಟುವಟಿಕೆಗಳನ್ನು ಕೈಗೊಳ್ಳಲಾಗಿರುತ್ತದೆ.<br>1. ದಿನಾಂಕ:24.01.2018, 21.01.2019, 21.01.2020 ಮತ್ತು 21.01.2021 ಗಳಂದು ನಿಜಶರಣ ಅಂಬಿಗರ ಚೌಡಯ್ಯ ಜಯಂತೋತ್ಸವ ಕಾರ್ಯಕ್ರಮ ನಡೆಸಲಾಗಿದೆ.<br>2. ವಿಚಾರಣಾ ಸಂಕೀರ್ಣಗಳನ್ನು ಹಮ್ಮಿಕೊಳ್ಳಲಾಗಿದೆ.<br>3. ವಿಶೇಷ ಉಪನ್ಯಾಸಕ ಕಾರ್ಯಕ್ರಮಗಳನ್ನು ಜರುಗಿಸಲಾಗಿದೆ.<br>4. ಅಂಬಿಗರ ಚೌಡಯ್ಯನವರ ಧ್ವನಿಸುರಳಿ ತಯಾರಿಸಿ ಬಿಡುಗಡೆ ಮಾಡಲಾಗಿದೆ. |
| (ಇ) | ಈ ಅಧ್ಯಯನ ಪೀಠದ ಕಟ್ಟಡ ಸಂಪೂರ್ಣವಾಗಿ ಬಿರುಕು ಬಿಟ್ಟಿದ್ದು ಇದಕ್ಕೆ ಕಾರಣಕರ್ತರು ಯಾರು ಮತ್ತು ಹಾಗಾಗಲು ಕಾರಣಗಳೇನು; | ಈ ಅಧ್ಯಯನ ಪೀಠದ ಕಟ್ಟಡವು ಸುಮಾರು 10 ವರ್ಷಗಳ ಕಟ್ಟಡವಾಗಿದ್ದು (ಆರ್.ಸಿ.ಸಿ. ಫ್ರೇಮ್ ಸ್ಟ್ರಕ್ಚರ್ ಕಟ್ಟಡ) ಅಲ್ಲಲ್ಲಿ ಸಣ್ಣ ಬಿರುಕುಗಳಿದ್ದು, ಕಟ್ಟಡದ ಸುರಕ್ಷತೆಗೆ ಯಾವ ಧಕ್ಕೆ ಇರುವುದಿಲ್ಲ. ಆದಾಗ್ಯೂ, ಸದರಿ ಪೀಠಕ್ಕೆ ನಿರ್ವಹಣಾ ಕಾಮಗಾರಿ ಕೈಗೊಂಡು ಬಿರುಕುಗಳನ್ನು ಮುಚ್ಚಿಸಲು ಕ್ರಮ ಕೈಗೊಳ್ಳಲಾಗುವುದು. |
| (ಈ) | ಅಂಬಿಗರ ಚೌಡಯ್ಯನವರ ಪೀಠದ ಶೈಕ್ಷಣಿಕ ಚಟುವಟಿಕೆಗಳು ಇನ್ನು ಮುಂದೆಯಾದರೂ ಸರಿಯಾಗಿ ನಡೆಸಿಕೊಂಡು ಹೋಗುವರೇ? | ಶೈಕ್ಷಣಿಕ ವಿದ್ವತ್ ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಅಂಬಿಗರ ಚೌಡಯ್ಯನವರ ಪೀಠದ ಶೈಕ್ಷಣಿಕ ಚಟುವಟಿಕೆಗಳನ್ನು ಅಭಿವೃದ್ಧಿ ಮಾರ್ಗದಲ್ಲಿ ನಡೆಸಲಾಗುವುದು. |

ಸಂಖ್ಯೆ: ಇಡಿ 43 ಯುಜಿವಿ 2021

**(ಡಾ: ಅಶ್ವಥ್ ನಾರಾಯಣ ಸಿ.ಎನ್.)**
ಉನ್ನತ ಶಿಕ್ಷಣ, ಐಟಿ ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು